# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೧೫ (ಚೈತ್ರ ೫, ಶಕ ವರ್ಷ ೧೯೩೭)<br>Bengaluru, Thursday, March 26, 2015 (Chaitra 5, Shaka Varsha 1937) | ಸಂಚಿಕೆ ೧೩<br>Issue 13 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು–01**

**ಅಧಿಸೂಚನೆ**

**ಸಂ : ಕೃಮಾಇ/58/ನಿಯವಿ/2007, ದಿನಾಂಕ : 03/01/2015**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರಡಿಯಲ್ಲಿ ಅಧಿಸೂಚನೆ ಸಂಖ್ಯೆ:ರಾಮಾಇ/59/ನಿಯವಿ/85, ದಿನಾಂಕ:05.09.1986ರಲ್ಲಿ ತುಮಕೂರು ನಗರಪುರಸಭೆ ಎಲ್ಲೆ ಮತ್ತು ಬಟವಾಡೆ ಗ್ರಾಮದ ಎಲ್ಲೆಗಳನ್ನು ಒಳಗೊಂಡ ಪ್ರದೇಶವನ್ನು ಮಾರುಕಟ್ಟೆ ಎಂದು ಮತ್ತು ಸದರಿ ಅಧಿಸೂಚನೆಯ ಅನುಸೂಚಿಯಲ್ಲಿ ಬಟವಾಡೆ ಗ್ರಾಮದ ಸೀಮೆಯೊಳಗಿನ ವಿವಿಧ ಸರ್ವೆ ನಂಬರ್ ಗಳನ್ನೊಳಗೊಂಡ 47 ಎಕರೆ 31 ಗುಂಟೆ ಪ್ರದೇಶದ ನಿಗಧಿಪಡಿಸಿದ ಸ್ಥಳವನ್ನು ಮಾರುಕಟ್ಟೆ ಪ್ರಾಂಗಣವೆಂದು ಹಾಗೂ ಅಧಿಸೂಚನೆ ಸಂಖ್ಯೆ:ಕೃಮಾಇ/41/ನಿಯವಿ/2005, ದಿನಾಂಕ:23.02.2005ರಲ್ಲಿ ತುಮಕೂರು ಪಟ್ಟಣದ ಜೆ.ಸಿ. ರಸ್ತೆಗೆ ಹೊಂದಿಕೊಂಡಂತಿರುವ 53X110 ಚದರ ಮೀಟರ್‌ನ ಸೀಮಾಬದ್ದ ಸ್ಥಳವನ್ನು ಮಾರುಕಟ್ಟೆ ಉಪ ಪ್ರಾಂಗಣವೆಂದು ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಘೋಷಿಸಲಾಗಿದೆ.

ನಂತರದಲ್ಲಿ ತುಮಕೂರಿನ ಅಂತರಸನಹಳ್ಳಿ ಗ್ರಾಮದ ಸರ್ವೆ ನಂ.8ರಲ್ಲಿ 8ಎಕರೆ ಜಮೀನನ್ನು ಸಮಿತಿಯು ಹೂ, ಹಣ್ಣು, ತರಕಾರಿ ಉತ್ಪನ್ನಗಳಿಗಾಗಿ ಅಭಿವೃದ್ಧಿಪಡಿಸಿದ್ದು, ಅಧಿಸೂಚನೆ ಸಂ:ಕೃಮಾಇ/58/ನಿಯಇ/2007, ದಿ:23/09/2010 ರಲ್ಲಿ ತರಕಾರಿ, ಹೂವು, ಬೆಳ್ಳುಳ್ಳಿ, ಶುಂಠಿ, ವೀಳ್ಯದೆಲೆ, ಹಣ್ಣು ಉತ್ಪನ್ನಗಳನ್ನು ಮಾರಾಟ ನಿಯಂತ್ರಣಕ್ಕೆ ಒಳಪಡಿಸಿ ಘೋಷಿಸಲಾಗಿದೆ.

ನಂತರದಲ್ಲಿ ಅಧಿಸೂಚನೆ ಸಂ:ಕೃಮಾಇ/41/ನಿಯವಿ/2005, ದಿ: 03/01/2015 ರಲ್ಲಿ ಈಗಾಗಲೇ ದಿ:23/02/2005 ರಲ್ಲಿ ಘೋಷಣೆಯಾಗಿರುವ ಮಾರುಕಟ್ಟೆ ಉಪ ಪ್ರಾಂಗಣದ ಜೊತೆಗೆ ಸಮಿತಿ ಒಡೆತನದ 15.50*16.50 ಮೀಟರ್ ಪ್ರದೇಶವನ್ನು ಮಾರುಕಟ್ಟೆ ಉಪ ಪ್ರಾಂಗಣವೆಂದು ಘೋಷಿಸಲಾಗಿದೆ.

ತುಮಕೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮೇಲ್ಕಂಡ ಮಾರುಕಟ್ಟೆ ಉಪ ಪ್ರಾಂಗಣದಲ್ಲಿ ಅಧಿಸೂಚಿತವಾಗಿರುವ ಕೃಷಿ ಉತ್ಪನ್ನಗಳಲ್ಲಿ ಬಾಳೆಹಣ್ಣು ಮತ್ತು ವೀಳ್ಯೆದೆಲೆ ಉತ್ಪನ್ನವನ್ನು ಮುಂದುವರೆಸಿ ಉಳಿದ ಉತ್ಪನ್ನಗಳನ್ನು ಅಪವರ್ಜಿಸಲು ಅಧಿಸೂಚನೆ ಹೊರಡಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿದ್ದು, ಪರಿಶೀಲಿಸಿದೆ. ಅಂತರಸನಹಳ್ಳಿ ಮಾರುಕಟ್ಟೆ ಉಪ ಪ್ರಾಂಗಣವನ್ನು ಈಗಾಗಲೇ ಅಭಿವೃದ್ಧಿಪಡಿಸಿದ್ದು, ವ್ಯಾಪಾರ ವಹಿವಾಟಿಗೆ ಪೂರಕ ಸೌಲಭ್ಯಗಳನ್ನು ಕಲ್ಪಿಸಿರುವುದರಿಂದ ಸಮಿತಿ ಪ್ರಸ್ತಾವನೆಯನ್ನು ಅಂಗೀಕರಿಸಿದೆ.

ಆದ್ದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6 (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೃಷಿ ಮಾರಾಟ ನಿರ್ದೇಶಕನಾದ ಡಾ॥ಮುದ್ದು ಮೋಹನ್ ಆದ ನಾನು ತುಮಕೂರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ವ್ಯಾಪ್ತಿಯಲ್ಲಿನ ತುಮಕೂರು ನಗರಸಭೆ ಪ್ರದೇಶದ ಪರಿಮಿತಿಯೊಳಗಿನ ಅಂತರಸನಹಳ್ಳಿ ಗ್ರಾಮದ ಸರ್ವೆ ನಂ.8 ರಲ್ಲಿನ 8 ಎಕರೆಯ ಮಾರುಕಟ್ಟೆ ಉಪ ಪ್ರಾಂಗಣವೆಂದು ಘೋಷಿಸಿರುವ ಪ್ರದೇಶದ ಅಧಿಸೂಚನೆಯ ಅನುಸೂಚಿ–ಅ ದಲ್ಲಿ ನಿಗಧಿಪಡಿಸಿರುವ ಕೃಷಿ ಉತ್ಪನ್ನಗಳಲ್ಲಿ ವೀಳ್ಯೆದೆಲೆ, ಬಾಳೆಹಣ್ಣು ಹೊರತುಪಡಿಸಿ ಉಳಿದ ಉತ್ಪನ್ನಗಳ ವಹಿವಾಟು ನಡೆಸಲು ಹಾಗೂ ದಿ:23/09/2010 ಹಾಗೂ ದಿ: /01/2015 ರಲ್ಲಿನ ಮೇಲ್ಕಂಡ ಮಾರುಕಟ್ಟೆ ಉಪ ಪ್ರಾಂಗಣದಲ್ಲಿ ಬಾಳೆಹಣ್ಣು ಮತ್ತು ವೀಳ್ಯೆದೆಲೆ ಉತ್ಪನ್ನ ವಹಿವಾಟಿಗೆ ನಿಗಧಿಪಡಿಸಿ ಉಳಿದ ಉತ್ಪನ್ನಗಳನ್ನು ಅಪವರ್ಜಿಸಲು ಉದ್ದೇಶಿಸಿದ್ದು, ಸದರಿ ಉದ್ದೇಶಕ್ಕೆ ಸಂಬಂಧಿಸಿದಂತೆ ಬಾಧಿತರಾಗುವವರಿಂದ ಆಕ್ಷೇಪಣೆ/ಸಲಹೆಗಳನ್ನು ಆಹ್ವಾನಿಸಿದೆ.

ಆಕ್ಷೇಪಣೆಗಳು ಅಥವಾ ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರ ಅಥವಾ ಕನ್ನಡ ದಿನಪತ್ರಿಕೆಯಲ್ಲಿ ಯಾವುದು ತಡವಾಗಿ ಪ್ರಕಟವಾಗುವುದೊ ಆ ದಿನಾಂಕದಿಂದ 32 ದಿನಗಳೊಳಗೆ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು–560001 ಇವರಿಗೆ ಸಲ್ಲಿಸಲು ಸೂಚನೆ ನೀಡಿದೆ.

**P.R. 320**
**SC 30**

**ಡಾ॥ ಮುದ್ದು ಮೋಹನ್**
ನಿರ್ದೇಶಕರು

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ : ಕೃಮಾಇ/348/ನಿಯವಿ/2009,** ದಿನಾಂಕ: 09/01/2015

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 145(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅಧಿಸೂಚನೆ ಸಂಖ್ಯೆ:ಸಇ/295/ಎಂಆರ್‌ಇ/2011, ದಿ:10/12/2014ರ ಮೂಲಕ ಅಧಿಸೂಚಿತ ಕೃಷಿ ಉತ್ಪನ್ನಗಳ ಪರಿಣಾಮಕಾರಿ ಮಾರಾಟಕ್ಕಾಗಿ ಹೊಳೆನರಸೀಪುರ ತಾಲ್ಲೂಕನ್ನು ಒಳಗೊಂಡಂತೆ ಹೊಳೆನರಸೀಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರವನ್ನು ನಿಗಧಿಪಡಿಸಿದೆ.

ಮತ್ತು ಆ ಕಾರಣ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿನ ವಿಧಾನವನ್ನು ಅನುಸರಿಸಿ ಅಧಿಸೂಚನೆ ಸಂ:(1) ಎಸ್‌ಎಂಡಿ/179/ಆರ್‌ಜಿಎನ್/81, ದಿ:25/01/1983, (2)ಕೃಮಾಇ/187/ನಿಯವಿ/90, ದಿ:21/10/1995, (3)ಎಂಡಿ/12253/ಆರ್‌ಎನ್–2/70–71, ದಿ:03/07/1970, (4)ರಾಮಾಇ/266/ನಿಯವಿ/87, ದಿ:17–19/12/1987, (5)ರಾಮಾಇ/71/ನಿಯವಿ/87, ದಿ:26/09/1987 ಗಳನ್ನು ಮಾರ್ಪಡಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಡಾ॥ ಮುದ್ದು ಮೋಹನ್ ಆದ ನಾನು, ಹೊಳೆನರಸೀಪುರ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಈ ಕೆಳಗೆ ನಮೂದಿಸಿದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಹೊಳೆನರಸೀಪುರ ನಗರಸಭಾ ಪರಿಮಿತಿಯೊಳಗಿನ ಪ್ರದೇಶವನ್ನು ಮಾರುಕಟ್ಟೆ' ಎಂದು ಮತ್ತು ಈ ಕೆಳಗಿನ ಅನುಸೂಚಿ ಎ ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು ಮಾರುಕಟ್ಟೆ ಪ್ರಾಂಗಣ ಎಂದು, ದೊಡ್ಡಹಳ್ಳಿ ಗ್ರಾಮದ ಪರಿಮಿತಿಯೊಳಗಿನ ಪ್ರದೇಶವನ್ನು "ಉಪ ಮಾರುಕಟ್ಟೆ" ಎಂದು ಹಾಗೂ ಅನುಸೂಚಿ–ಬಿ ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು "ಉಪ ಮಾರುಕಟ್ಟೆ ಪ್ರಾಂಗಣ" ವೆಂದು ಈ ಮೂಲಕ ಘೋಷಿಸಿದ್ದೇನೆ.

**ಕೃಷಿ ಉತ್ಪನ್ನಗಳು**

1. ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ.

**ಅನುಸೂಚಿ–ಎ**

ಹೊಳೆನರಸೀಪುರ ನಗರಸಭಾ ಪರಿಮಿತಿಯೊಳಗಿನ ದಕ್ಷಿನಾಳ ಗ್ರಾಮದ ಸರ್ವೆ ನಂ.136, 136/1, 137/1, 137/2, 137/3, 138/1, 138/2, 139/2 ರಲ್ಲಿನ 8 ಎಕರೆ 33 ಗುಂಟೆ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಗ್ರಾಮಠಾಣಾ ಮತ್ತು ದಕ್ಷಿನಾಳ ರಸ್ತೆ. |
| ಪಶ್ಚಿಮಕ್ಕೆ | : | ಮಾಲಂಗ ಷಾವಾಲಿ ಬಡೆ ಮಖಾನ್ (ಪರದೇಶಿ ಮಠ್) ಮತ್ತು ಸರ್ವೆ ನಂ.140 ದಕ್ಷಿನಾಳ ಗ್ರಾಮ. |
| ಉತ್ತರಕ್ಕೆ | : | ಹೊಳೆನರಸೀಪುರ–ಅರಕಲಗೂಡು ರಸ್ತೆ ಮತ್ತು ಗ್ರಾಮಠಾಣಾ. |
| ದಕ್ಷಿಣಕ್ಕೆ | : | ದಕ್ಷಿನಾಳ ರಸ್ತೆ ಮತ್ತು ಸರ್ವೆ ನಂ.150, 151, ದಕ್ಷಿನಾಳ ಗ್ರಾಮ. |

**ಅನುಸೂಚಿ–ಬಿ**

ದೊಡ್ಡಹಳ್ಳಿ ಗ್ರಾಮದ ಪರಿಮಿತಿಯೊಳಗೆ ಸಂತೆ ನಡೆಯುವ ಸರ್ವೆ ನಂ.94ರ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಗೋಮಾಳ ಆಫ್ ಸರ್ವೆ ನಂ.93. |
| ಪಶ್ಚಿಮಕ್ಕೆ | : | ಮೈಸೂರು–ಹಾಸನ ರಸ್ತೆ. |
| ಉತ್ತರಕ್ಕೆ | : | ದೊಡ್ಡಹಳ್ಳಿ ಗ್ರಾಮದ ಸರ್ವೆ ನಂ.95 |
| ದಕ್ಷಿಣಕ್ಕೆ | : | ಸರ್ವೆ ನಂ.93ರ ಗೋಮಾಳ (ಗ್ರೇಜಿಂಗ್ ಗ್ರೌಂಡ್) |

**P.R. 231** **ಡಾ॥ ಮುದ್ದು ಮೋಹನ್**
**SC 30** ನಿರ್ದೇಶಕರು

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 2ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ : ಕೃಮಾಇ/348/ನಿಯವಿ/2009,** ದಿನಾಂಕ: 09/01/2015

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 145(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಸರ್ಕಾರವು ಅಧಿಸೂಚನೆ ಸಂಖ್ಯೆ:ಸಇ/295/ಎಂಆರ್‌ಇ/2011, ದಿ:10/12/2014ರ ಮೂಲಕ ಅಧಿಸೂಚಿತ ಕೃಷಿ ಉತ್ಪನ್ನಗಳ**

**ಪರಿಣಾಮಕಾರಿ ಮಾರಾಟಕ್ಕಾಗಿ ಅರಕಲಗೂಡು ತಾಲ್ಲೂಕನ್ನು ಒಳಗೊಂಡಂತೆ ಅರಕಲಗೂಡು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರವನ್ನು ನಿಗಧಿಪಡಿಸಿದೆ.**

ಮತ್ತು ಆ ಕಾರಣ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿನ ವಿಧಾನವನ್ನು ಅನುಸರಿಸಿ ಅಧಿಸೂಚನೆ ಸಂ:(1) ಎಸ್‌ಎಂಡಿ/179/ಆರ್‌ಜಿಎನ್/81, ದಿ:25/01/1983, (2)ಕೃಮಾಇ/187/ನಿಯವಿ/90, ದಿ:21/10/1995, (3)ಎಂಡಿ/12253/ಆರ್‌ಎನ್–2/70–71, ದಿ:03/07/1970, (4)ರಾಮಾಇ/266/ನಿಯವಿ/87, ದಿ:17–19/12/1987, (5)ರಾಮಾಇ/71/ನಿಯವಿ/87, ದಿ:26/09/1987 ಗಳನ್ನು ಮಾರ್ಪಡಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಡಾ॥ ಮುದ್ದು ಮೋಹನ್ ಆದ ನಾನು, ಅರಕಲಗೂಡು ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಈ ಕೆಳಗೆ ನಮೂದಿಸಿದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಅರಕಲಗೂಡು ಪಟ್ಟಣ ಪುರಸಭಾ ಪರಿಮಿತಿಯೊಳಗಿನ ಪ್ರದೇಶವನ್ನು **ಮಾರುಕಟ್ಟೆ'** ಎಂದು ಮತ್ತು ಈ ಕೆಳಗಿನ ಅನುಸೂಚಿ ಎ ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು **ಮಾರುಕಟ್ಟೆ ಪ್ರಾಂಗಣ** ಎಂದು, ಮಲ್ಲಿಪಟ್ಟಣ ಮಂಡಲ ಪಂಚಾಯಿತಿ ಪರಿಮಿತಿಯೊಳಗಿನ ಪ್ರದೇಶ, ಕೊಣನೂರು ಪಟ್ಟಣ ಪುರಸಭಾ ಪ್ರದೇಶವನ್ನು "**ಉಪ ಮಾರುಕಟ್ಟೆ**" ಗಳೆಂದು ಹಾಗೂ ಅನುಸೂಚಿ–ಬಿ, ಸಿ ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು "**ಉಪ ಮಾರುಕಟ್ಟೆ ಪ್ರಾಂಗಣ**" ಗಳೆಂದು ಈ ಮೂಲಕ ಘೋಷಿಸಿದ್ದೇನೆ.

### ಕೃಷಿ ಉತ್ಪನ್ನಗಳು

1. ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿರ್ದ್ಧೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ.

### ಅನುಸೂಚಿ–ಎ

ಅರಕಲಗೂಡು ಮಂಡಲ ಪಂಚಾಯಿತಿ ಪರಿಮಿತಿಯೊಳಗಿನ ಕ್ಕೆಲ್ಲೂರು ಗ್ರಾಮದ ಸರ್ವೆ ನಂ.112/1, 112/2, 123/1, 123/2ಎ, 123/2ಬಿ ರಲ್ಲಿರುವ ಒಟ್ಟು 7 ಎಕರೆ 27 ಗುಂಟೆ ಜಮೀನಿನ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಕ್ಕೆಲೂರು ಗ್ರಾಮ ಸಾ ಮಿಲ್. |
| ಪಶ್ಚಿಮಕ್ಕೆ | : | ಅರಕಲಗೂಡಿನಿಂದ ರಾಮನಾಥಪುರಕ್ಕೆ ಹೋಗುವ ರಸ್ತೆ ಮತ್ತು ಖಾಸಗಿಯವರ ಜಮೀನು. |
| ಉತ್ತರಕ್ಕೆ | : | ಅರಕಲಗೂಡು ಮತ್ತು ಹೊಳೆನರಸೀಪುರ ರಸ್ತೆ. |
| ದಕ್ಷಿಣಕ್ಕೆ | : | ಗೃಹ ನಿರ್ಮಾಣ ಮಂಡಳಿಯ ಮನೆಗಳು. |

### ಅನುಸೂಚಿ–ಬಿ

ಮಲ್ಲಿಪಟ್ಟಣ ಗ್ರಾಮದ ಮೋಜಣಿ ಸಂ:56 ರಲ್ಲಿ ಪ್ರಸ್ತುತ ಸಂತೆ ನಡೆಯುತ್ತಿರುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಮಲ್ಲಿಪಟ್ಟಣದಿಂದ ಕೊಣನೂರಿಗೆ ಹೋಗುವ ದಾರಿ. |
| ಪಶ್ಚಿಮಕ್ಕೆ | : | ಕೆರೆ ಸರ್ವೆ ನಂ.57. |
| ಉತ್ತರಕ್ಕೆ | : | ಕೂಡ್ಲಿ ಪೇಟೆಯಿಂದ ಅರಕಲಗೂಡಿಗೆ ಹೋಗುವ ರಸ್ತೆ. |
| ದಕ್ಷಿಣಕ್ಕೆ | : | ಸರ್ವೆ ನಂ.58 ಮತ್ತು 59ರ ಜಮೀನು. |

### ಅನುಸೂಚಿ–ಸಿ

ಕೊಣನೂರು ಪಟ್ಟಣದಲ್ಲಿನ ಚಕ್ಕುಬಂದಿಗಳಿಂದ ಕೂಡಿದ ಸಂತೆ ಮೈದಾನವೆಂದು ಕರೆಯುತ್ತಿರುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

| | | |
|---|---|---|
| ಪೂರ್ವಕ್ಕೆ | : | ಪುರಸಭೆ ಮನೆಗಳು. |
| ಪಶ್ಚಿಮಕ್ಕೆ | : | ಕೆರೆ ಮತ್ತು ಕೆರೆಸಾಲೆ ಜಮೀನು. |
| ಉತ್ತರಕ್ಕೆ | : | ಪುರಸಭೆ ಮನೆಗಳು. |
| ದಕ್ಷಿಣಕ್ಕೆ | : | ರೆವಿನ್ಯೂ ಜಮೀನುಗಳು. |

**P.R. 232**

**SC 30**

**ಡಾ॥ ಮುದ್ದು ಮೋಹನ್**

ನಿರ್ದೇಶಕರು

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಗ್ರಾಅಪ 19 ಜಿಪಅ 2015, ಬೆಂಗಳೂರು, ದಿನಾಂಕ 24–03–2015**

**ವಿಷಯ:** ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2015ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ.

**ಉಲ್ಲೇಖ:–**

1. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 310 ಜಿಪಅ 2013 ದಿನಾಂಕ 07.10.2013.
2. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 07.11.2014.
3. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 473 ಜಿಪಅ 2014 ದಿನಾಂಕ 25.11.2014
4. ಸರ್ಕಾರಿ ಅಧಿಸೂಚನೆ ಸಂಖ್ಯೆ ಗ್ರಾಅಪ 19 ಜಿಪಅ 2015 ದಿನಾಂಕ 24–01–2015
5. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 174 ಜಿಪಅ 2014 ದಿನಾಂಕ 11.06.2014
6. ಲೋಕೋಪಯೋಗಿ ಇಲಾಖೆಯ ಅಧಿಸೂಚನೆ ಸಂಖ್ಯೆ ಲೋಇ 209 ಸೇಸಕಿ 2014 ದಿನಾಂಕ 01–09–2014 ಮತ್ತು 27–10–2014
7. ಲೋಕೋಪಯೋಗಿ ಇಲಾಖೆಯ ಅಧಿಸೂಚನೆ ಸಂಖ್ಯೆ ಲೋಇ 98 ಸೇಸಕಿ 2010 ದಿನಾಂಕ 15–11–2010.
8. ಲೋಕೋಪಯೋಗಿ ಇಲಾಖೆಯ ಅಧಿಸೂಚನೆ ಸಂಖ್ಯೆ ಲೋಇ 283 ಸೇಸಕಿ 2011 ದಿನಾಂಕ 01–12–2011.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ಉಲ್ಲೇಖದ ಕ್ರಮ ಸಂಖ್ಯೆ (1) (2) ಮತ್ತು (3) ರ ಆದೇಶಗಳಲ್ಲಿ ವಿಲೀನಗೊಂಡ ಸಹಾಯಕ ಇಂಜಿನಿಯರ್‌ಗಳ ಸೇವಾ ಜ್ಯೇಷ್ಠತೆಯನ್ನು ನಿಗದಿಪಡಿಸಿ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ಹೊರಡಿಸಿ, ಸದರಿ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯಿಂದ ಬಾಧಿತರಾಗುವ ಅಧಿಕಾರಿಗಳು ತಮ್ಮ ಆಕ್ಷೇಪಣೆ / ಸಲಹೆ ಏನಾದರೂ ಇದ್ದಲ್ಲಿ ಉಲ್ಲೇಖ (4)ರ ಅಧಿಸೂಚನೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 15 ದಿನಗಳ ಒಳಗಾಗಿ ಅಂತಹ ಆಕ್ಷೇಪಣೆ / ಸಲಹೆಗಳನ್ನು ಸಲ್ಲಿಸಲು ಸೂಚಿಸಲಾಗಿತ್ತು.

ಈ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯ ಸಂಬಂಧವಾಗಿ ನಿಗದಿತ ಅವಧಿಯಲ್ಲಿ ಸ್ವೀಕೃತವಾಗಿರುವ ಆಕ್ಷೇಪಣೆ ಮತ್ತು ಸಲಹೆಗಳನ್ನು ಪರಿಗಣಿಸಲಾಗಿದ್ದು, ಈ ಅಧಿಸೂಚನೆಯ ಜೊತೆ ಲಗತ್ತಿಸಿರುವ ವಿವರಣಾ ಪಟ್ಟಿಯಲ್ಲಿ ಅವುಗಳನ್ನು ನಮೂದಿಸಿದೆ.

ಈ ಹಿನ್ನೆಲೆಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದಲ್ಲಿ ದಿನಾಂಕ 01–01–2015ರಲ್ಲಿದ್ದಂತೆ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ಅನುಬಂಧದಲ್ಲಿ ಈ ಕೆಳಕಂಡ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪ್ರಕಟಿಸಲಾಗಿದೆ:–

1) **ಸಹಾಯಕ ಇಂಜಿನಿಯರ್ ವೃಂದದಲ್ಲಿ ಲೋಕೋಪಯೋಗಿ ಇಲಾಖೆಯು ಉಲ್ಲೇಖಿತ (6) (7) ಮತ್ತು (8)ರ ಅಧಿಸೂಚನೆಗಳಲ್ಲಿ ಪ್ರಕಟಿಸಿರುವ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ನಿಗದಿಪಡಿಸಿರುವ ಅಂತರ್ ಜೇಷ್ಠತೆ (inter-se seniority)ಯನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.**
2) **ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸಿದ ನಂತರ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಕಾರ್ಯವರದಿ ಮಾಡಿಕೊಳ್ಳದಿರುವ ಸಹಾಯಕ ಇಂಜಿನಿಯರ್‌ಗಳನ್ನು ಸದರಿ ವೃಂದದಲ್ಲಿ ಈಗ ಜ್ಯೇಷ್ಠತೆ ನಿಗದಿಪಡಿಸಲು ಪರಿಗಣಿಸಿರುವುದಿಲ್ಲ.**
3) **ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದಲ್ಲಿ ಇನ್ನು ಮುಂದೆ ವಿಲೀನಗೊಳ್ಳುವವರ ಜ್ಯೇಷ್ಠತೆಯನ್ನು ಅವರ ಮಾತೃ ಇಲಾಖೆಯಲ್ಲಿನ ಅಂತರ್ ಜ್ಯೇಷ್ಠತೆ (inter-se seniority)ಯನ್ನು ಆಧರಿಸಿ ಕಾಪಾಡಲಾಗುವುದು..**
4) **ಉಲ್ಲೇಖ (5)ರ ದಿನಾಂಕ 11.06.2014ರಲ್ಲಿ ಪ್ರಕಟಿಸಿದ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಒಳಗೊಂಡ ಎಲ್ಲಾ ಅಧಿಕಾರಿಗಳಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಮುಂಬಡ್ತಿಯನ್ನು ನೀಡಲಾಗಿದೆ. ಸದರಿ ದಿನಾಂಕ 11.06.2014ರ ಜ್ಯೇಷ್ಠತಾ ಪಟ್ಟಿಯು ಮುಕ್ತಾಯಗೊಂಡಿರುವ ಕಾರಣ ಈ ಅಧಿಸೂಚನೆಗೆ ಲಗತ್ತಿಸಿರುವ ಪಟ್ಟಿಯಲ್ಲಿ ಜ್ಯೇಷ್ಠತೆಯನ್ನು ಅನುಕ್ರಮ ಸಂಖ್ಯೆ (1)ರಿಂದ ಪ್ರಾರಂಭಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿದ್ದೇಶ್ ಪೋತಲಕಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು–ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ವಿವರಣಾ ಪಟ್ಟಿ

| ಕ್ರಸಂ. | ಆಕ್ಷೇಪಣೆ / ಸಲಹೆ ಸಲ್ಲಿಸಿರುವ ಅಧಿಕಾರಿಗಳು | ಆಕ್ಷೇಪಣೆ / ಸಲಹೆಯ ಸ್ವರೂಪ | ಆಕ್ಷೇಪಣೆಯನ್ನು ಪರಿಗಣಿಸುವುದಕ್ಕೆ / ತಿರಸ್ಕರಿಸುವುದಕ್ಕೆ ಕಾರಣಗಳು |
|---|---|---|---|
| (1) | ಶ್ರೀ ಸಿ. ಸೂರ್ಯನಾರಾಯಣ ಭಟ್ಟ, ಸಹಾಯಕ ಇಂಜಿನಿಯರ್, ಪಂ.ರಾ.ಇಂ.ವೃತ್ತ, ಮಂಗಳೂರು | ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7–11–2014ರಲ್ಲಿ ತಮ್ಮನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸಿದ್ದು, ಸದರಿ ಆದೇಶದಂತೆ ಈ ಇಲಾಖೆಯಲ್ಲಿ ವರದಿ ಮಾಡಿಕೊಳ್ಳದೆ ಇರುವ ಕಾರಣ ಅಧಿಸೂಚನೆ ಸಂಖ್ಯೆ ಗ್ರಾಅಪ 19 ಜಿಪಅ 2015 ದಿನಾಂಕ 24–01–2015ರಂದು ಹೊರಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಜ್ಯೇಷ್ಠತಾ ಪಟ್ಟಿಯಲ್ಲಿ ತಮ್ಮ ಹೆಸರು ಸೇರ್ಪಡೆ ಆಗದೆ ಇರುವುದರಿಂದ ದಿನಾಂಕ 24–02–2015ರಂದು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಲ್ಲಿ ವರದಿ ಮಾಡಿಕೊಳ್ಳುತ್ತಾ, ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ ನಮೂದಿಸಿ ಪ್ರಕಟಿಸುವಂತೆ ಕೋರಿರುತ್ತಾರೆ. | ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7–11–2014ರಲ್ಲಿ ಸದರಿಯವರ ಸೇವೆಯನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದಲ್ಲಿ ವಿಲೀನಗೊಳಿಸಲಾಗಿದೆ. ಇವರು ದಿನಾಂಕ 24–02–2015 ರಂದು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಲ್ಲಿ ವರದಿ ಮಾಡಿಕೊಂಡಿರುವುದರಿಂದ ಈಗ ಇವರ ಹೆಸರನ್ನು ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ (3)ರಲ್ಲಿ ನಿಗದಿಪಡಿಸಲಾಗಿದೆ. ಇದರಿಂದ ಇವರ ಮನವಿಯನ್ನು ಪರಿಗಣಿಸಿದಂತಾಗಿದೆ. |
| (2) | ಶ್ರೀ ಬಿ.ವೈ.ದಂಡಿನ, ತಾಂತ್ರಿಕ ಸಹಾಯಕರು, ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ವಿಭಾಗ, ಬಾಗಲಕೋಟೆ. | ಗ್ರಾ.ಅ.ಪಂ.ರಾಜ್ ಇಲಾಖೆಯಲ್ಲಿ ಅಧಿಸೂಚನೆ ಸಂಖ್ಯೆ ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7–11–2014ರಲ್ಲಿ ತಮ್ಮನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸಿದ್ದು, ಸದರಿ ಆದೇಶದಂತೆ ಹಿಂದಿನ ಹುದ್ದೆಯ ಕರ್ತವ್ಯದಿಂದ ದಿನಾಂಕ 23–1–2015ರಂದು ಬಿಡುಗಡೆಗೊಂಡು ತಾಂತ್ರಿಕ ಸಹಾಯಕರು, ಗ್ರಾ.ಕು.ನೀ. & ನೈ. ವಿಭಾಗ, ಬಾಗಲಕೋಟೆ ಇಲ್ಲಿ ದಿನಾಂಕ 27–1–2015ರಂದು ಕರ್ತವ್ಯಕ್ಕೆ ಹಾಜರಾಗಿದ್ದು, ತಮ್ಮ ಹೆಸರನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದದ ಜ್ಯೇಷ್ಠತಾ ಪಟ್ಟಿಯಲ್ಲಿ ಸೇರಿಸಲು ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. | ಸದರಿ ಅಧಿಕಾರಿಯ ಸೇವೆಯನ್ನು ಅಧಿಸೂಚನೆ ಸಂಖ್ಯೆ ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7–11–2014ರಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸ ಲಾಗಿದೆ. ಸದರಿ ಅಧಿಕಾರಿಯವರು ಮೂಲತ: ಲೋಕೋಪಯೋಗಿ ಇಲಾಖೆಯ ಅಧಿಕಾರಿಯಾಗಿದ್ದು, ಇವರಿಗೆ ಲೋಕೋಪಯೋಗಿ ಇಲಾಖೆಯು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದದಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿರುವುದು ಒಂದು ತಾತ್ಕಾಲಿಕ ವ್ಯವಸ್ಥೆ ಆಗಿರುವುದರಿಂದ ಇವರ ಹೆಸರನ್ನು ಸಹಾಯಕ ಇಂಜಿನಿಯರ್ ಜ್ಯೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡಲಾಗಿದೆ. |
| (3) | ಶ್ರೀ ಬಿ.ಎಸ್.ಕುಂಬಾರ್, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಹಾಗೂ ಇತರರು | ಸದರಿ ಅಧಿಕಾರಿಗಳು ದಿನಾಂಕ 24–01–2015ರಂದು ಹೊರಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಗೆ ಆಕ್ಷೇಪಣೆ ವ್ಯಕ್ತಪಡಿಸುತ್ತಾ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಅನುಸಾರ ಕಿರಿಯ ಇಂಜಿನಿಯರ್ ವೃಂದದಲ್ಲಿ 8 ವರ್ಷಗಳ ಸೇವೆ ಸಲ್ಲಿಸಿದವರಿಗೆ ಸಹಾಯಕ ಇಂಜಿನಿಯರ್ ವೃಂದಕ್ಕೆ ಮುಂಬಡ್ತಿಯನ್ನು ನೀಡಲು ಅವಕಾಶವಿರುತ್ತದೆ. ಪ್ರಸಕ್ತ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ವಿಲೀನಗೊಂಡಿರುವ ತಾವುಗಳು ಲೋಕೋಪಯೋಗಿ ಇಲಾಖೆಯಲ್ಲಿ ಕನಿಷ್ಠ 18 – 22 ವರ್ಷಗಳ ಸೇವೆ ಸಲ್ಲಿಸಿದ ನಂತರ ತಮಗೆ ಕಿರಿಯ ಇಂಜಿನಿಯರ್ (ವಿ.ದ.) ವೃಂದಕ್ಕೆ ಮುಂಬಡ್ತಿ ದೊರೆತಿರುತ್ತದೆ. ಕಿರಿಯ ಇಂಜಿನಿಯರ್ (ವಿ.ದ.) ಮತ್ತು ಸಹಾಯಕ ಇಂಜಿನಿಯರ್ ವೃಂದಗಳು ಸಮಾನ ವೇತನ ಶ್ರೇಣಿಯನ್ನು ಹೊಂದಿರುತ್ತವೆ. ಪ್ರಸ್ತುತ ಎರಡೂ ವೃಂದಗಳ ವೇತನ ಶ್ರೇಣಿ ರೂ. 22800 – 43200 ಇರುತ್ತದೆ. ಲೋಕೋಪಯೋಗಿ<br>ಇಲಾಖೆಯು ಆದೇಶ ಸಂಖ್ಯೆ ಲೋ ಇ 176 ಸೇಎಸು 2009 ದಿನಾಂಕ 11–09–2009ರಲ್ಲಿ ಕಿರಿಯ ಇಂಜಿನಿಯರ್ (ವಿ.ದ.) ಹುದ್ದೆಯನ್ನು ತಕ್ಷಣದಿಂದ ಜಾರಿಗೆ | ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ದಿನಾಂಕ 24–05–2008ರಂದು ಹೊರಡಿಸಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದ ಇರುವುದಿಲ್ಲ. ಸದರಿ ವೃಂದವನ್ನು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸುವ ಕುರಿತಂತೆ ಪ್ರತ್ಯೇಕ ಕಡತದಲ್ಲಿ ಪರಿಶೀಲಿಸಿ ಕ್ರಮವಹಿಸಲಾಗುತ್ತಿರುವುದರಿಂದ ಸದರಿಯವರ ಕೋರಿಕೆಯನ್ನು ತಿರಸ್ಕರಿಸಲಾಗಿದೆ. |

| | | | |
|---|---|---|---|
| | | ಬರುವಂತೆ ಸಹಾಯಕ ಇಂಜಿನಿಯರ್ (ವಿಭಾಗ-2) ಎಂದು ಮರುಪದನಾಮೀಕರಿಸಿ ಆದೇಶಿಸಿರುತ್ತದೆ. ಅಲ್ಲದೆ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಕಿರಿಯ ಇಂಜಿನಿಯರ್ (ವಿ.ದ.) ವೃಂದವನ್ನು ಸೃಜಿಸದೆ ಕಿರಿಯ ಇಂಜಿನಿಯರ್ ವೃಂದದಿಂದ ಸಹಾಯಕ ಇಂಜಿನಿಯರ್ ವೃಂದಕ್ಕೆ ಮುಂಬಡ್ತಿಯನ್ನು ನೀಡಲು ಅವಕಾಶವನ್ನು ಕಲ್ಪಿಸಿರುವ ಹಿನ್ನೆಲೆಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16(ಎ)(ii)ರಲ್ಲಿ ತಮ್ಮ ಸೇವೆಯನ್ನು ವಿಲೀನಗೊಳಿಸಿರುವ ಕಾರಣ ಲೋಕೋಪಯೋಗಿ ಇಲಾಖೆಯಿಂದ ವಿಲೀನಗೊಂಡಿರುವ ಇತರೆ ವೃಂದಗಳ ಅಂದರೆ ಸಹಾಯಕ ಇಂಜಿನಿಯರ್‌ಗಳು ಲೋಕೋಪಯೋಗಿ ಇಲಾಖೆಯಲ್ಲಿ ಹೊಂದಿದ್ದ ಸೇವಾ ಅಂತರ್ ಜ್ಯೇಷ್ಠತೆಯನ್ನು ಪರಿಗಣಿಸಿ ತಮ್ಮಗಳಿಗೂ ಸಹ ಸಹಾಯಕ ಇಂಜಿನಿಯರ್ ವೃಂದದಲ್ಲಿ ಸೇವಾ ಜ್ಯೇಷ್ಠತೆಯನ್ನು ನಿಗದಿಪಡಿಸಬೇಕೆಂದು ಕೋರಿರುತ್ತಾರೆ. | |
| | | | |

**ಸಿದ್ದೇಶ್ ಪೋತಲಕಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ಅಧಿಸೂಚನೆ ಸಂಖ್ಯೆ ಗ್ರಾಅಪ 19 ಜಿಪಅ 2015 ದಿನಾಂಕ 24-03-2015ಕ್ಕೆ ಅನುಬಂಧ**

**ದಿನಾಂಕ 01.01.2015 ರಲ್ಲಿದ್ದಂತೆ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್ (ಗ್ರೂಪ್-ಬಿ) ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಲೋ.ಇ.ಯು ಪ್ರಕಟಿಸಿರುವ ಸ.ಇಂ. ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿನ ಅಂತರ್ ಜ್ಯೇಷ್ಠತಾ ಕ್ರ.ಸಂ. | ಅಧಿಕಾರಿಯ ಹೆಸರು ಶ್ರೀಯುತರು | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಸ.ಇಂ. ವೃಂದದಲ್ಲಿನ ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| 1. | 1995 | ಬಿ.ವೈ.ದಂಡಿನ | 20.11.1958 | 02.05.1984 | 11.04.1984 | ಸದರಿ ಅಧಿಕಾರಿಯವರ ಸೇವೆಯನ್ನು ಸರ್ಕಾರದ ಆದೇಶ ಸಂಖ್ಯೆ ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7-11-2014ರಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ. ಆದರೆ, ಲೋಕೋಪಯೋಗಿ ಇಲಾಖೆಯು ಇವರನ್ನು ಕೆ.ಸಿ.ಎಸ್.ಆರ್. ನಿಯಮ 32ರಡಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದದಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ್ದು, ಇದೊಂದು ತಾತ್ಕಾಲಿಕ ವ್ಯವಸ್ಥೆ ಆಗಿರುವುದರಿಂದ ಇವರ ಜ್ಯೇಷ್ಠತೆಯನ್ನು ಸಹಾಯಕ ಇಂಜಿನಿಯರ್ ವೃಂದದಲ್ಲಿ ನಿಗದಿಪಡಿಸಲಾಗಿದೆ. |

| ಕ್ರ ಸಂ. | ಲೋ.ಇ.ಯು ಪ್ರಕಟಿಸಿರುವ ಸ.ಇಂ. ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿನ ಅಂತರ್ ಜ್ಯೇಷ್ಠತಾ ಕ್ರ.ಸಂ. | ಅಧಿಕಾರಿಯ ಹೆಸರು ಶ್ರೀಯುತರು | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಸ.ಇಂ. ವೃಂದದಲ್ಲಿನ ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| 2. | 2990 | ವಿ.ರಾಮಾಂಜನಪ್ಪ | 08.02.1959 | 29.12.1986 | 19.03.1991 | ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7.11.2014 ರಲ್ಲಿ ಇವರ ಸೇವೆಯನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದಲ್ಲಿ ವಿಲೀನಗೊಳಿಸಿ ಆದೇಶಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 15.11.2010ರ ಪ್ರಕಾರ ಶ್ರೀ ವಿ.ರಾಮಾಂಜನಪ್ಪ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 2990 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ 2ರಲ್ಲಿ ನಿಗದಿಪಡಿಸಲಾಗಿದೆ. |
| 3. | 3149 | ಸಿ. ಸೂರ್ಯನಾರಾಯಣ ಭಟ್ | 12.04.1962 | 03.12.1985 | 13.11.1991 | ಇವರನ್ನು ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7.11.2014 ರಲ್ಲಿ ವಿಲೀನಗೊಳಿಸಲಾಗಿದೆ. ಸದರಿಯವರು ಗ್ರಾ.ಅ.ಪಂ. ರಾಜ್ ಇಲಾಖೆಯಲ್ಲಿ ದಿನಾಂಕ 24-02-2015ರಂದು ಕಾರ್ಯ ವರದಿ ಮಾಡಿಕೊಂಡಿರುತ್ತಾರೆ. ಲೋಕೋಪಯೋಗಿ ಇಲಾಖೆಯ ಜ್ಯೇಷ್ಠತಾ ಪಟ್ಟಿಯ ಅನುಸಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 3149 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 3ರಲ್ಲಿ ನಿಗದಿಪಡಿಸಲಾಗಿದೆ. |
| 4. | 3227 | ಬಿ.ಎಸ್.ಕುಮಾರ್ | 23.07.1959 | 15.02.1984 | 15.02.1994 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 473 ಜಿಪಅ 2014 ದಿನಾಂಕ 25.11.2014 ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 15-11-2010ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 3227 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 4ರಲ್ಲಿ ನಿಗದಿಪಡಿಸಲಾಗಿದೆ. |
| 5. | 3551 | ವಿನಾಯಕ ಜೆ. ಹುಲ್ಲೂರ | 09.09.1964 | 16.06.1994 | 05.09.1996 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 473 ಜಿಪಅ 2014 ದಿನಾಂಕ 25.11.2014ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 15.11.2010ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 3551 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 5ರಲ್ಲಿ ನಿಗದಿಪಡಿಸಲಾಗಿದೆ. |
| 6. | 3634 | ಕೆ.ಮುತ್ತಪ್ಪ | 05.06.1962 | 26.07.1987 | 25.07.1997 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7.11.2014ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 15.11.2010ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 3634 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 6ರಲ್ಲಿ ನಿಗದಿಪಡಿಸಲಾಗಿದೆ. |

| ಕ್ರ ಸಂ. | ಲೋ.ಇ.ಯು ಪ್ರಕಟಿಸಿರುವ ಸ.ಇಂ. ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿನ ಅಂತರ್ ಜ್ಯೇಷ್ಠತಾ ಕ್ರ.ಸಂ. | ಅಧಿಕಾರಿಯ ಹೆಸರು ಶ್ರೀಯುತರು | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಸ.ಇಂ. ವೃಂದದಲ್ಲಿನ ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| 7. | 3663 | ಎ.ಎಸ್.ಬಣಗಾರ | 16.07.1964 | 11.01.1988 | 11.01.1998 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7.11.2014 ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 15.11.2010ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 3663 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 7ರಲ್ಲಿ ನಿಗದಿಪಡಿಸಲಾಗಿದೆ. |
| 8. | 3667 | ಎಲ್. ಶ್ರೀಕಂಠಯ್ಯ | 04.12.1962 | 30.01.1988 | 30.01.1998 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7.11.2014 ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 15.11.2010ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 3667 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 8ರಲ್ಲಿ ನಿಗದಿಪಡಿಸಲಾಗಿದೆ. |
| 9. | 3852ಎ | ಜಿ.ಇಂದ್ರಕುಮಾರ್ | 23.11.1969 | 05.06.1989 | 05.06.1999 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7.11.2014 ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 15.11.2010ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 3773 ಆಗಿದ್ದು, ನಂತರ ತಿದ್ದುಪಡಿ ಸಂಖ್ಯೆ ಲೋ ಇ 283 ಸೇಸಕಿ 2011 ದಿನಾಂಕ 1–12–2011ರಲ್ಲಿ ಜ್ಯೇಷ್ಠತಾ ಕ್ರಮ ಸಂಖ್ಯೆ 3852ಎ ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 9ರಲ್ಲಿ ನಿಗದಿಪಡಿಸಲಾಗಿದೆ. |
| 10. | 3904 | ಹೆಚ್.ಎನ್.ಮಂಜುನಾಥ್ | 15.07.1967 | 06.07.1998 | 12.05.2002 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7.11.2014 ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜೇಷ್ಠತಾ ಪಟ್ಟಿ ದಿನಾಂಕ 15.11.2010ರ ಪ್ರಕಾರ ಇವರ ಜೇಷ್ಠತಾ ಕ್ರಮ ಸಂಖ್ಯೆ 3904 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜೇಷ್ಠತೆಯನ್ನು ಆಧರಿಸಿ ಇವರ ಜೇಷ್ಠತೆಯನ್ನು ಕ್ರಮ ಸಂಖ್ಯೆ 10ರಲ್ಲಿ ನಿಗದಿಪಡಿಸಲಾಗಿದೆ. |
| 11. | 4577 | ನಾರಾಯಣಿ (ಎಸ್.ಸಿ.) | 01.06.1964 | 01.09.2003 | 24.05.2005 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 310 ಜಿಪಅ 2013 ದಿನಾಂಕ 7.10.2013ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 27–10–2014ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 4577 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 11ರಲ್ಲಿ ನಿಗದಿಪಡಿಸಲಾಗಿದೆ. |

| ಕ್ರ ಸಂ. | ಲೋ.ಇ.ಯು ಪ್ರಕಟಿಸಿರುವ ಸ.ಇಂ. ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿನ ಅಂತರ್ ಜ್ಯೇಷ್ಠತಾ ಕ್ರ.ಸಂ. | ಅಧಿಕಾರಿಯ ಹೆಸರು ಶ್ರೀಯುತರು | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಸ.ಇಂ. ವೃಂದದಲ್ಲಿನ ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| 12. | 4743 | ಪಿ.ಮಾಲತೇಶ (ಎಸ್.ಸಿ.) | 01.04.1971 | 01.09.2003 | 24.05.2005 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 310 ಜಿಪಅ 2013 ದಿನಾಂಕ 7.10.2013ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 27–10–2014ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 4743 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 12ರಲ್ಲಿ ನಿಗದಿಪಡಿಸಲಾಗಿದೆ. |
| 13. | 4761 | ಎಸ್.ಉಮೇಶ್ (ಎಸ್.ಸಿ.) | 04.06.1969 | 01.09.2003 | 24.05.2005 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 473 ಜಿಪಅ 2014 ದಿನಾಂಕ 25.11.2014ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 27–10–2014ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 4761ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 13ರಲ್ಲಿ ನಿಗದಿಪಡಿಸಲಾಗಿದೆ. |
| 14. | 5225 | ಸತ್ಯದೇವನಾಯಕ (ಎಸ್.ಟಿ.) | 01.06.1971 | 01.09.2002 | 06.08.2006 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7.11.2014 ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮ ಜ್ಯೇಷ್ಠತಾ ಪಟ್ಟಿ ದಿನಾಂಕ 27–10–2014ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 5225 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 14ರಲ್ಲಿ ನಿಗದಿಪಡಿಸಲಾಗಿದೆ. |
| 15. | 5471 | ಬಸವರಾಜ್ ಕೆ. ಹಲಚೇರ | 01.08.1965 | 01.11.2002 | 10.08.2008 | ಸದರಿ ಅಧಿಕಾರಿಯವರ ಸೇವೆಯನ್ನು ಆದೇಶ ಸಂಖ್ಯೆ ಗ್ರಾಅಪ 516 ಜಿಪಅ 2013 ದಿನಾಂಕ 7.11.2014ರಲ್ಲಿ ವಿಲೀನಗೊಳಿಸಲಾಗಿದೆ. ಲೋ.ಇ.ಯ ಅಂತಿಮಜ್ಯೇಷ್ಠತಾ ಪಟ್ಟಿ ದಿನಾಂಕ 1–9–2014ರ ಪ್ರಕಾರ ಇವರ ಜ್ಯೇಷ್ಠತಾ ಕ್ರಮ ಸಂಖ್ಯೆ 5471 ಆಗಿದ್ದು, ಲೋಕೋಪಯೋಗಿ ಇಲಾಖೆಯ ಸೇವಾ ಅಂತರ್ ಜ್ಯೇಷ್ಠತೆಯನ್ನು ಆಧರಿಸಿ ಇವರ ಜ್ಯೇಷ್ಠತೆಯನ್ನು ಕ್ರಮ ಸಂಖ್ಯೆ 15ರಲ್ಲಿ ನಿಗದಿಪಡಿಸಲಾಗಿದೆ. |

**ಟಿಪ್ಪಣಿ :–** ಶ್ರೀ ವಿ.ಆರ್.ದೇಶಪಾಂಡೆ ಮತ್ತು ಶ್ರೀ ಬಿ.ಜಿ.ಭಾಸ್ಕರ್ ಇವರುಗಳ ಸೇವೆಯನ್ನು ಸರ್ಕಾರಿ ಆದೇಶ ಸಂ: ಗ್ರಾಅಪ 310 ಜಿಪಅ 2013 ದಿ: 7.10.2013 ರಲ್ಲಿ ಹಾಗೂ ಶ್ರೀ ವೈ.ಎಂ.ರಾಜು ಇವರ ಸೇವೆಯನ್ನು ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 473 ಜಿಪಅ 2014 ದಿನಾಂಕ 25.11.2014 ರಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸಲಾಗಿದ್ದು, ಈ ಮೂವರು ಅಧಿಕಾರಿಗಳು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ ಇಲಾಖೆಯಲ್ಲಿ ಕಾರ್ಯ ವರದಿ ಮಾಡಿಕೊಳ್ಳದಿರುವುದರಿಂದ ಇವರ ಹೆಸರುಗಳನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಜ್ಯೇಷ್ಠತೆಯಲ್ಲಿ ಪರಿಗಣಿಸಿರುವುದಿಲ್ಲ.

**ಸಿದ್ದೇಶ್ ಪೋತಲಕಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು–ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

PR. 394
SC. 200

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### "ತಿದ್ದುಪಡಿ ಅಧಿಸೂಚನೆ"

**ಸಂಖ್ಯೆ: ಸಿಐ 203 ಎಸ್‌ಪಿಕ್ಯೂ 2013, ಬೆಂಗಳೂರು, ದಿನಾಂಕ: 18-03-2015**

ಸರ್ಕಾರವು ಕೆಐಎಡಿ ಕಾಯ್ದೆ, 1966ರ ವಿಧಿ 28(1)ರಡಿಯಲ್ಲಿ ತನ್ನ ಅಧಿಸೂಚನೆ ಸಂಖ್ಯೆ : ಸಿಐ 754 ಎಸ್‌ಪಿಕ್ಯೂ 2007 ದಿನಾಂಕಃ 01-12-2009 ರನ್ವಯ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕೋರಾ ಹೋಬಳಿ, ವಸಂತನರಸಾಪುರ ಮತ್ತಿತರ 8 ಗ್ರಾಮಗಳಲ್ಲಿ ಒಟ್ಟು 1711-16 ಎಕರೆ ಜಮೀನುಗಳನ್ನು ಕೈಗಾರಿಕಾ ಪ್ರದೇಶಾಭಿವೃದ್ಧಿಗಾಗಿ (ಸುವರ್ಣ ಕರ್ನಾಟಕ ಕಾರಿಡಾರ್ ಯೋಜನೆ) ಸ್ವಾಧೀನಪಡಿಸಿಕೊಂಡಿದ್ದು, ಈ ಅಧಿಸೂಚನೆ ಪುಟ ಸಂಖ್ಯೆಃ 70 ಕ್ರಮ ಸಂಖ್ಯೆ : 41ರಲ್ಲಿ 63-30 ಎಕರೆ ಸರ್ಕಾರಿ ಜಮೀನಾಗಿದ್ದು, ಈ ಸರ್ವೆ ನಂಬರ್ ಜಮೀನಿನಲ್ಲಿ ದರಖಾಸ್ತು ಮೂಲಕ ಹಲವು ಜನರಿಗೆ ಜಮೀನು ಮಂಜೂರಾಗಿರುತ್ತದೆ. ಈ ಮಂಜೂರಿ ದಾಖಲೆಗಳನ್ನು ಅನುಸರಿಸಿ ಜೆ.ಎಂ.ಸಿ., ಕೆಲಸ ನಿರ್ವಹಿಸಿದ್ದು, ತಹಶೀಲ್ದಾರ್, ತುಮಕೂರು ಇವರಿಂದ ಜೆ.ಎಂ.ಸಿ.,ಯನ್ನು ಪಡೆಯಲಾಗಿರುತ್ತದೆ.

ಈ ಜೆ.ಎಂ.ಸಿ., ವರದಿಗೂ ವಿಧಿ 28(1)ರ ಅಧಿಸೂಚನೆಗೂ ವ್ಯತ್ಯಾಸವಿರುವುದರಿಂದ ಮತ್ತು ಮಂಜೂರಿ ನೈಜತೆ ಬಗ್ಗೆ ದಾಖಲೆಗಳನ್ನು ಪರಿಶೀಲಿಸಿ ಜೆ.ಎಂ.ಸಿ., ವರದಿಯನ್ನು ತಹಶೀಲ್ದಾರ್, ತುಮಕೂರು ಇವರು ಕಳುಹಿಸಿರುವುದರಿಂದ ಜೆ.ಎಂ.ಸಿ., ವರದಿಯನ್ನು ಅನುಸರಿಸಿ ದಿನಾಂಕಃ 01-12-2009ರಂದು ಹೊರಡಿಸಿರುವ 28(1)ರ ಅಧಿಸೂಚನೆಗೆ ಈ ಕೆಳಗಿನಂತೆ ತಿದ್ದುಪಡಿ ಅಧಿಸೂಚನೆಯನ್ನು ಹೊರಡಿಸಿರುವುದು ಅಗತ್ಯವಾಗಿರುವುದು ಕಂಡುಬಂದಿರುತ್ತದೆ.

ವಿಧಿ 28(1)ರಡಿ ಈಗಾಗಲೇ ಹೊರಡಿಸಿರುವ ಮೇಲ್ಕಂಡ ಅಧಿಸೂಚನೆಗೆ ಈ ಕೆಳಗಿನಂತೆ ತಿದ್ದುಪಡಿ ಹೊರಡಿಸಲಾಗಿದೆ.

**(1) ಗ್ರಾಮ : ತಿಪ್ಪೇದಾಸರಹಳ್ಳಿ ಹೋಬಳಿ : ಕೋರ ತಾಲ್ಲೂಕು : ತುಮಕೂರು ಜಿಲ್ಲೆ : ತುಮಕೂರು**

| ವಿಧಿ 28(1)ರ ಅಧಿಸೂಚನೆಯಂತೆ | | | | | | ತಿದ್ದುಪಡಿಯಂತೆ | | | | | |
|---|---|---|---|---|---|---|---|---|---|---|---|
| ಗೆಜೆಟ್ ಕ್ರ.ಸಂ. | ಖಾತೆದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | | ಗೆಜೆಟ್ ಕ್ರ.ಸಂ. | ಖಾತೆದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | |
| | | ಸರ್ವೆ ನಂ. | ವಿಸ್ತೀರ್ಣ ಎ-ಗು | ಖರಾಬ್ ಎ-ಗು | ಐನ್ ಎ-ಗು | | | ಸರ್ವೆ ನಂ. | ವಿಸ್ತೀರ್ಣ ಎ-ಗು | ಖರಾಬ್ ಎ-ಗು | ಐನ್ ಎ-ಗು |
| 1 | 2 | 3 | 4 | 5 | 6 | 1 | 2 | 3 | 4 | 5 | 6 |
| 41 | ಸರ್ಕಾರಿ ಗೋಮಾಳ | 14 | 63-30 | 63-30 | - | 1. | 1) ಮುದ್ದಯ್ಯ ಬಿನ್ ದೊಡ್ಡಯ್ಯ | 14 | 2-00 | - | 2-00 |
| | | | | | | | 2)ಕಂಬಯ್ಯ ಬಿನ್ ಪುಟ್ಟನರಸಯ್ಯ | | 2-00 | - | 2-00 |
| | | | | | | | 3) ಲಕ್ಷ್ಮಮ್ಮ ಕೋಂ ಹನುಮಯ್ಯ | | 2-00 | - | 2-00 |
| | | | | | | | 4) ರಂಗಯ್ಯ ಬಿನ್ ರಂಗಯ್ಯ | | 2-00 | - | 2-00 |
| | | | | | | | 5) ವೆಂಕಟಪ್ಪ ಬಿನ್ ಗಿರಿಯಪ್ಪ | | 2-00 | - | 2-00 |
| | | | | | | | 6) ಹನುಮಂತರಾಯಪ್ಪ ಬಿನ್ ಲೇಟ್ ನರಸಿಂಹಯ್ಯ | | 2-00 | - | 2-00 |
| | | | | | | | 7) ಹನುಮಂತಯ್ಯ ಬಿನ್ ಕೆ.ಪಿ.ನರಸಿಂಹಯ್ಯ | | 2-00 | - | 2-00 |
| | | | | | | | 8) ಶಿವಲಿಂಗಯ್ಯ ಬಿನ್ ವೆಂಕಟೇಶಯ್ಯ | | 2-00 | - | 2-00 |
| | | | | | | | 9) ಸಣ್ಣ ಭೀಮಯ್ಯ ಬಿನ್ ಹನುಮಂತಯ್ಯ | | 2-00 | - | 2-00 |

| | | | | | | | | | | | |
|---|---|---|---|---|---|---|---|---|---|---|---|
| | | | | | | | 10) ವೆಂಕಟಪ್ಪ ಬಿನ್ ಗಿರಿಯಪ್ಪ | | 1–00 | – | 1–00 |
| | | | | | | | 11) ರಾಮಯ್ಯ ಬಿನ್ ಭೀಮಯ್ಯ ದೊಡ್ಡರಂಗಪ್ಪ ಬಿನ್ ನಾಗಪ್ಪ | | 1–00 | – | 1–00 |
| | | | | | | | 12) ದೊಡ್ಡಮಲ್ಲಯ್ಯ ಬಿನ್ ಸಿದ್ದಯ್ಯ | | 2–00 | – | 2–00 |
| | | | | | | | 14) ದೊಡ್ಡಯ್ಯ ಬಿನ್ ಜೋಗಪ್ಪ | | 2–07 | – | 2–07 |
| | | | | | | | 15) ತಿಮ್ಮಕ್ಕ ಕೋಂ ನಂಜುಂಡಯ್ಯ, ರಾಮಚಂದ್ರಯ್ಯ ಬಿನ್ ತಿಮ್ಮಕ್ಕ, ಸಿದ್ದೇಶ್ ಮೈಗಾ, ತಿಮ್ಮಕ್ಕ | | 2–00 | – | 2–00 |
| | | | | | | | 16) ಸಿದ್ದಯ್ಯ ಬಿನ್ ಓಬಳಯ್ಯ | | 2–00 | – | 2–00 |
| | | | | | | | 17) ರಂಗಪ್ಪ ಬಿನ್ ರಂಗದಾಸಪ್ಪ | | 2–00 | – | 2–00 |
| | | | | | | | 18) ಹಳ್ಳಿರಂಗಯ್ಯ ಬಿನ್ ಚಿಕ್ಕಣ್ಣ | | 2–00 | – | 2–00 |
| | | | | | | | 19) ಸರ್ಕಾರಿ ಖರಾಬ್ | | 2–00 | – | 2–00 |
| | | | | | | | | ಒಟ್ಟು | **63–30** | **28–03** | **35–27** |
| | **(2) ಗ್ರಾಮ : ಬಹುಜನಹಳ್ಳಿ** | | **ಹೋಬಳಿ : ಕೋರ** | | | | **ತಾಲ್ಲೂಕು : ತುಮಕೂರು** | **ಜಿಲ್ಲೆ : ತುಮಕೂರು** | | | |
| 9 | ಸರ್ಕಾರಿ ಗೋಮಾಳ | 10ರ ಪೈಕಿ | 5–30 | 5–30 | – | 1. | ಕೆಂಪಯ್ಯ ಬಿನ್ ರಂಗಯ್ಯ ಮತ್ತು ಪುಟ್ಟನರಸಮ್ಮ ಕೋಂ ರಂಗಯ್ಯ | 10/1 ಪೈಕಿ | 4–35 | 1–15 | 3–20 |
| | | | | | | 2. | ಸರ್ಕಾರಿ ಗೋಮಾಳ | | 0–35 | 0–35 | – |
| | | | | | | | | ಒಟ್ಟು | 5–30 | 2–10 | 3–20 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ) (ಪ್ರ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**PR. 396**
**SC. 50**

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ, ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ, ಬಹುಮಹಡಿ ಕಟ್ಟಡ, ಬೆಂಗಳೂರು–560 001

### ಅಧಿಸೂಚನೆ

2014–15ನೇ ಸಾಲಿನ ಆರ್ಥಿಕ ವರ್ಷದ ವಾರ್ಷಿಕ ದಾಸ್ತಾನು ಪರಿಶೀಲನೆಯ ಪ್ರಯುಕ್ತ ಬೆಂಗಳೂರಿನಲ್ಲಿರುವ ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆಯಲ್ಲಿ ದಿನಾಂಕ: 06.04.2015 ರಿಂದ ದಿನಾಂಕ: 18.04.2015ರವರಗೆ ಎಲ್ಲಾ ಸಾರ್ವಜನಿಕರಿಗೆ ಹಾಗೂ ಸರ್ಕಾರಿ ಕಛೇರಿಗಳಿಗೆ ಪುಸ್ತಕ ಮತ್ತು ಪ್ರಕಟಣೆಗಳ ಮಾರಾಟವನ್ನು ನಿಲ್ಲಿಸಲಾಗಿದೆ ಎಂದು ಈ ಮೂಲಕ ತಿಳಿಯಪಡಿಸಿದೆ.

**ಎಂ. ರವಿಶಂಕರ್**

ನಿರ್ದೇಶಕರು

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## OFFICE OF THE DIRECTOR OF PRINTING, STATIONERY AND PUBLICATIONS, GOVERNMENT CENTRAL BOOK DEPOT, M.S. BUILDING, BANGALORE-560 001

### NOTIFICATION

It is hereby notified for the information of all public and Government Offices that there will be no sales of Books & Publications from the Government Book Depot, Bangalore from dated: 06.04.2015 to 18.04.2015 (both days inclusive) on account of Annual Stock verification for the financial year 2014-15

**M. Ravishankar**
Director

**PR. 392**
**SC. 25**

## ಜಂಟಿ ನಿರ್ದೇಶಕರ ಕಛೇರಿ ಗಣಿ ಮತ್ತು ಭೂವಿಜ್ಞಾನ ಇಲಾಖೆ, ನಂ 167, 11 ನೇ ಮೇನ್ ಸರಸ್ವತಿಪುರಂ ಮೈಸೂರು

### ಅಧಿಸೂಚನೆ

**ಸಂಖ್ಯೆ: ಗಭೂಇ/ದವ/ಜಂನಿಮೈ/ಕಗಗು:ನಿ–8ಎ/2014–15, ದಿನಾಂಕ: 09.03.2015**

ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ–1994, ನಿಯಮ 8ಎ ಉಪನಿಯಮ (1) ರಂತೆ ಈ ಕೆಳಗೆ ನಮೂದಿಸಿರುವ ಕಟ್ಟಡ ಕಲ್ಲಿನ ಪ್ರದೇಶಗಳನ್ನು ಕಲ್ಲು ಗಣಿಗಾರಿಕೆ ಮಾಡುವ ಸಲುವಾಗಿ ಸಾರ್ವಜನಿಕ ಅವಗಾಹನೆಗಾಗಿ ಪ್ರಕಟಿಸಲಾಗಿದೆ.

ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ಗ್ರಾಮಾಂತರ, ದೂರವಾಣಿ ಸಂಖ್ಯೆ: 08022866620 ಇವರಿಂದ ಕಲ್ಲು ಗಣಿ ಗುತ್ತಿಗೆಗಾಗಿ ಅರ್ಜಿಗಳನ್ನು ಸ್ವೀಕರಿಸಲಾಗುವುದು. ಪರಿಷ್ಕೃತ ನಿಯಮಾವಳಿಯಂತೆ ಅಧಿಕೃತವಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ 30 ದಿನಗಳ ನಂತರ ಸಾಮಾನ್ಯ ರಜಾ ದಿನ ಅಥವಾ ಸಾರ್ವತ್ರಿಕ ರಜಾ ದಿನವಾದರೆ, ಅರ್ಜಿಯನ್ನು ಮಾರನೇ ಕೆಲಸದ ದಿನದಂದು ಸ್ವೀಕರಿಸಲಾಗುವುದು.

ನಿಗದಿತ ಶುಲ್ಕ ಪಾವತಿ ಮಾಡಿ ನಿಗದಿತ ಅರ್ಜಿ ನಮೂನೆ ಮತ್ತು ಪ್ರದೇಶದ ನಕಾಶೆಯನ್ನು ಉಪ ನಿರ್ದೇಶಕರು ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ಗ್ರಾಮಾಂತರ ಇವರಿಂದ ಪಡೆಯಬಹುದಾಗಿರುತ್ತದೆ.

ಆಸಕ್ತಿ ಇರುವವರು ಅರ್ಜಿ ಸಲ್ಲಿಸುವ ಮೊದಲು ಪ್ರದೇಶದ ತಪಾಸಣೆ ಮಾಡಿ, ಖನಿಜ ಸಂಪತ್ತು ಲಭ್ಯತೆ ಇರುವ ಬಗ್ಗೆ ಮತ್ತು ಪ್ರದೇಶದ ಪ್ರಸಕ್ತ ಸ್ಥಿತಿ ಗತಿ ಬಗ್ಗೆ ಖಚಿತ ಪಡಿಸಿಕೊಳ್ಳತಕ್ಕದ್ದು. ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994 ನಿಯಮ 8ಎ ರಂತೆ ಅರ್ಜಿಯನ್ನು ಸ್ವೀಕರಿಸಲಾಗುವುದು. ಕಲ್ಲು ಗಣಿ ಗುತ್ತಿಗೆ ಮಂಜೂರಾತಿಯು ಕಂದಾಯ ಮತ್ತು ಅರಣ್ಯ ಇಲಾಖೆಯ ನಿರಾಕ್ಷೇಪಣಾ ಪತ್ರದ ಷರತ್ತಿಗೆ ಒಳಪಟ್ಟಿರುತ್ತದೆ.

| ಕ್ರ.ಸಂ | ಜಿಲ್ಲೆ | ತಾಲ್ಲೂಕು | ಖನಿಜ | ಗ್ರಾಮ | ಸರ್ವೆ ನಂ. | ವಿಸ್ತೀರ್ಣ (ಎಕರೆ–ಗುಂಟೆ) | ಹಳೇ ಕ.ಗ.ಗು.ಸಂಖ್ಯೆ | ಚೆಕ್ಕುಬಂದಿ |
|---|---|---|---|---|---|---|---|---|
| 1 | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | ಕಟ್ಟಡ ಕಲ್ಲು | ತೈಲಗೆರೆ | 110 | 1–00 | 2182 | ಉ: ಸ.ನಂ. 110 ರ ಭಾಗ<br>ದ: ಸ.ನಂ. 110 ರ ಭಾಗ<br>ಪೂ: ಸ.ನಂ.110 ರ ಭಾಗ<br>ಪ: ಸ.ನಂ. 110 ರ ಭಾಗ |

**ಜಂಟಿ ನಿರ್ದೇಶಕರು**
ಗಣಿ ಮತ್ತು ಭೂವಿಜ್ಞಾನ ಇಲಾಖೆ, ದಕ್ಷಿಣ ವಲಯ, ಮೈಸೂರು

**PR. 395**
**SC. 05**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59